# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ.ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | (236)69 |
| ಉತ್ತರಿಸಬೇಕಾದ ದಿನಾಂಕ | : | 16/07/2019 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು. |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ತಾಲ್ಲೂಕಿನ ಜನವಾಡ ಬಳಿಯ ಮಾಂಜ್ರಾ ಬ್ಯಾರೇಜಿನ ಎತ್ತರ ಹೆಚ್ಚಿಸಲು ಟೆಂಡರ್ ಕರೆದಿರುವುದು ನಿಜವೇ :ಹಾಗಿದ್ದಲ್ಲಿ, ಟೆಂಡರ್ ಅಂತಿಮಗೊಳಿಸಿ ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಿದ ನಂತರ ಇಡೀ ಕಾಮಗಾರಿಯನ್ನು ರದ್ದುಗೊಳಿಸಲು ಕಾರಣವೇನು : | ಬೀದರ್ ತಾಲ್ಲೂಕಿನ ಜನವಾಡ ಬಳಿಯ ಮಾಂಜ್ರಾ ಬ್ಯಾರೇಜಿನ ಎತ್ತರ ಹೆಚ್ಚಿಸಲು ಟೆಂಡರ್ ಕರೆದಿರುವುದಿಲ್ಲ.<br><br>**ಕಾಮಗಾರಿಯನ್ನು ರದ್ದುಗೊಳಿಸಲು ಕಾರಣಗಳು** :-<br>1. ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಬೀದರ್ ನಗರಕ್ಕೆ ಕಾರಂಜಾ ಜಲಾಶಯದಿಂದ ನಿರಂತರ ನೀರು ಸರಬರಾಜು ಯೋಜನೆಯು ಚಾಲನೆಗೊಳಿಸಿದ್ದು ಹಾಗೂ ಈ ಯೋಜನೆಯು 2041 ರವರೆಗೆ ನೀರು ಸರಬರಾಜು ಮಾಡುವ ಸಾಮರ್ಥ್ಯ ಹೊಂದಿದ್ದರಿಂದ, ಜನವಾಡ ಹತ್ತಿರದ ಮಾಂಜ್ರಾ ನದಿಯಿಂದ ಹಾಲಿ ಇರುವ ಬೀದರ್ ನಗರದ ನೀರು ಸರಬರಾಜು ಯೋಜನೆಯ ಪುನಃಶ್ಚೇತನ ಕಾಮಗಾರಿಯನ್ನು ಕೈಬಿಡಲಾಯಿತು.<br><br>2. ಬೀದರ್ ನಗರದ ಶೇ.25 ರಷ್ಟು (ವಲಯ-1) ಭಾಗಕ್ಕೆ ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು ಹಾಗೂ ನಗರದ ಉಳಿದ ಶೇ.70 ರಷ್ಟು ಭಾಗಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವುದು ಅತ್ಯಾವಶ್ಯಕ ಇರುತ್ತದೆ. ಆದ್ದರಿಂದ, ಅಮೃತ್ ಯೋಜನೆಯಡಿಯ ನೀರು ಸರಬರಾಜು ವ್ಯವಸ್ಥೆಗೆ ಹಂಚಿಕೆ ಮಾಡಿದ ಮೊತ್ತವನ್ನು ಒಳಚರಂಡಿ ಕಾಮಗಾರಿಗೆ ಮರು ಹಂಚಿಕೆ ಮಾಡಲು ಕ್ರಮ ಜರುಗಿಸಲಾಗಿರುತ್ತದೆ.<br><br>3. ದಿನಾಂಕ : 27-12-2016 ರಂದು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಅಂದಿನ ಮಾನ್ಯ ಪೌರಾಡಳಿತ ಸಚಿವರು ಹಾಗೂ ಬೀದರ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಪ್ರಗತಿ ಪರಿಶೀಲನೆ ಸಭೆಯಲ್ಲಿ ಬೀದರ್ ನಗರಕ್ಕೆ ಅಮೃತ್ ಯೋಜನೆಯಡಿಯಲ್ಲಿ ನೀರು ಸರಬರಾಜು ಯೋಜನೆಯ ಪುನಃಶ್ಚೇತನ ಕಾಮಗಾರಿಯ ಬದಲಾಗಿ ಬೇರೆ ಕಾಮಗಾರಿಯನ್ನು ತೆಗೆದುಕೊಳ್ಳಲು ನಿರ್ದೇಶಿಸಿದಂತೆ, ಸರ್ಕಾರದ ಪತ್ರ ಸಂಖ್ಯೆ: ನಅಇ 31 ಸಮಸ 2017 ದಿನಾಂಕ: 25-01-2017 ರಲ್ಲಿ ಸದರಿ ಕಾಮಗಾರಿಯನ್ನು ರದ್ದುಗೊಳಿಸಿ, ಅದರ ಬದಲಾಗಿ ಬೀದರ ನಗರಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಕಾಮಗಾರಿಯನ್ನು ತೆಗೆದುಕೊಳ್ಳುವಂತೆ ಸೂಚಿಸಲಾಗಿದೆ. |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
| --- | --- | --- |
| ಆ) | ಬ್ಯಾರೇಜ್ ನಿರ್ಮಿಸಲು ಮೀಸಲಿಟ್ಟ ಹಣವನ್ನು ಯಾವ ಯಾವ ಕಾಮಗಾರಿಗಳಿಗೆ ಬಳಕೆ ಮಾಡಲಾಗಿದೆ ? (ವಿವರ ನೀಡುವುದು) | ಅನುಮೋದನೆಗೊಂಡ ಅಮೃತ್ ಯೋಜನೆಯಡಿ ಬ್ಯಾರೇಜ್ ನಿರ್ಮಿಸಲು ಯಾವುದೇ ಹಣವನ್ನು ಮೀಸಲಿಟ್ಟಿರುವುದಿಲ್ಲ. ಬೀದರ್ ನಗರಕ್ಕೆ ನೀರು ಸರಬರಾಜು ಕಾಮಗಾರಿಗೆ ನಿಗಧಿಪಡಿಸಿದ ರೂ.40.80 ಕೋಟಿಗಳನ್ನು ಬೀದರ ನಗರದ ವಲಯ-3 ರಲ್ಲಿ ಒಳಚರಂಡಿ ವ್ಯವಸ್ಥೆ ಕಲ್ಪಿಸಲು ಸದರಿ ಹಣವನ್ನು ಬಳಕೆ ಮಾಡಲಾಗುತ್ತಿದೆ. ಸದರಿ ಯೋಜನೆಯ ಟೆಂಡರ್ ಮೊತ್ತ ರೂ.61.42 ಕೋಟಿ ಆಗಿರುತ್ತದೆ. ಯೋಜನೆಯ ಕಾಮಗಾರಿಗಳು ಪ್ರಗತಿಯಲ್ಲಿವೆ. |

ನಅಇ 45 ಯುಡಬ್ಲ್ಯೂಎಲ್ 2019

(ಯು.ಟಿ ಖಾದರ್)
ನಗರಾಭಿವೃದ್ಧಿ ಸಚಿವರು.